**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಚಿಕ್ಕಮಗಳೂರು**
**ಪ್ರಕರಣ ಸಂಖ್ಯೆ: ಕಾನಪಕಾ.ಎಫ್.ಸಿ.11/2007**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಪುಟ್ಟಮ್ಮ ಕೋಂ ಈರಯ್ಯ<br>2) ಹರೀಶ್ ಬಿನ್ ಈರಯ್ಯ<br>3) ರಮ್ಯ ಬಿನ್ ಈರಯ್ಯ<br>4) ರಾಕೇಶ್ ಬಿನ್ ಈರಯ್ಯ<br>ವಾಸ: ತುಂಬಳ್ಳಿಪುರ, ಬಸರಹಳ್ಳಿ ವಿಲೇಜ್, ಸಂಗಮೇಶ್ವರಪೇಟೆ, ಚಿಕ್ಕಮಗಳೂರು ತಾ: | ವಿರುದ್ಧ | 1) ಮೆ: ಟಿಂಬರ್ ಮರ್ಚೆಂಟ್ಸ್ ವೆಲ್ಫೇರ್ ಆರ್ಗನಸೇಷನ್ ಅಂಡ್ ಟ್ರಸ್ಟ್ (ರಿ) ಆವತಿ ಕಾಂಪ್ಲೆಕ್ಸ್, ಮಲ್ಲಂದೂರು ರಸ್ತೆ, ಚಿಕ್ಕಮಗಳೂರು.<br>2) ದಿ ಮೆನೇಜರ್ ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂಪೆನಿ ಲಿ., ಕ್ರೆಸೆಂಟ್ ಕೋರ್ಟ್, ತೊಗರಿ ಹಂಕಲ್ ಸರ್ಕಲ್, ಐ.ಜಿ. ರಸ್ತೆ, ಚಿಕ್ಕಮಗಳೂರು.<br>3) ಶ್ರೀ ಸೋಮೇಶ್ ಬಿನ್ ಬಿ.ಆರ್. ನಾಗಪ್ಪಗೌಡ, ಟಿಂಬರ್ ಮರ್ಚೆಂಟ್ಸ್, ವಾಸ: ಸಂಗಮೇಶ್ವರಪೇಟೆ ವಿಲೇಜ್, ಮತ್ತು ಅಂಚೆ, ಚಿಕ್ಕಮಗಳೂರು ತಾ: |

**ಪ್ರಕಟಣೆ**

ಶ್ರೀಮತಿ ಪುಟ್ಟಮ್ಮ ಕೋಂ ಲೇಟ್ ಈರಯ್ಯ ಅವರು ಮೃತ ಈರಯ್ಯನ ಪತ್ನಿಯೆಂದು ಹಾಗೂ 2 ರಿಂದ 4ನೇ ಅರ್ಜಿದಾರರು ಮೃತ ಈರಯ್ಯನ ಮಕ್ಕಳೆಂದು ಮತ್ತು ಮೃತ ಈರಯ್ಯನ 1ನೇ ಪ್ರತಿವಾದಿಯ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ:12.04.2003 ರಂದು ಕರ್ತವ್ಯದ ಸಮಯದಲ್ಲಿ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದ ಸಂಬಂಧವಾಗಿ ಕಾರ್ಮಿಕ ನಷ್ಟ ಪರಿಹಾರಕ್ಕಾಗಿ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ಸದರಿ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ ವಿಚಾರಣೆಯಾಗಿ ದಿನಾಂಕ:24.08.2007ರಂದು ಆದೇಶವಾಗಿದ್ದು, ಅದರ ಪ್ರಕಾರ 2ನೇ ಪ್ರತಿವಾದಿಯು ಅರ್ಜಿದಾರರಿಗೆ ರೂ.4,77,000–00ಗಳ ಪರಿಹಾರಧನವನ್ನು ನೀಡಬೇಕೆಂದು ಆದೇಶವಾಗಿರುತ್ತದೆ. 2ನೇ ಪ್ರತಿವಾದಿಗಳು, ಸದರಿ ಪರಿಹಾರಧನವಾದ ರೂ.4,77,000–00 (ನಾಲ್ಕು ಲಕ್ಷದ ಎಪ್ಪತ್ತೇಳು ಸಾವಿರ ಮಾತ್ರ) ಗಳನ್ನು ಈ ನ್ಯಾಯಾಲಯದಲ್ಲಿ ದಿನಾಂಕ:18.09.2007ರಂದು ಠೇವಣಿ ಮಾಡಿರುತ್ತಾರೆ. ಠೇವಣಿ ಮಾಡಿರುವ ಪರಿಹಾರಧನವನ್ನು 1 ರಿಂದ 4ರ ಅರ್ಜಿದಾರರಿಗೆ ವಿತರಿಸಬೇಕಾಗಿರುತ್ತದೆ.

ಆದ್ದರಿಂದ ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಮೃತನ ಇತರೆ ವಾರಸುದಾರರು ಯಾರಾದರೂ ಇದ್ದಲ್ಲಿ ಪರಿಹಾರವನ್ನು ಕೋರಿ ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಬಹುದು. ನಿಗದಿತ ಅವಧಿಯ ನಂತರ ಬರುವ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಈ ಪ್ರಕಟಣೆಯನ್ನು ನನ್ನ ಹಸ್ತಾಕ್ಷರ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:20ನೇ ಸೆಪ್ಟೆಂಬರ್ 2007ರಂದು ನೀಡಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ ಕಾರ್ಮಿಕ ಅಧಿಕಾರಿ, ಉಪವಿಭಾಗ-1, ಚಿಕ್ಕಮಗಳೂರು.

ಪಿ.ಆರ್.1240

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಾವೇರಿ ವಿಭಾಗ ಇವರ ನ್ಯಾಯಾಲಯದಲ್ಲಿ**
**ನಂ: ಎ5/ಅಮೊ/ವಾಹನ/ /07-08, ಹಾವೇರಿ, ದಿನಾಂಕ: 17ನೇ ಆಗಸ್ಟ್ 2007**

| | | |
|---|---|---|
| **ಉಪಸ್ಥಿತರು** | : | ಶ್ರೀ ಆರ್. ಗೋಕುಲ, ಭಾ.ಅ.ಸೇ<br>ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು<br>ಹಾವೇರಿ ವಿಭಾಗ, ಹಾವೇರಿ. |
| **ಫಿರ್ಯಾಧಿದಾರರು** | : | ವಲಯ ಅರಣ್ಯ ಅಧಿಕಾರಿ ರಾಣೇಬೆನ್ನೂರು |
| **ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ. |
| **ಬಾಧ್ಯತೆದಾರರು** | : | ಯಾರೂ ಬಂದಿರುವುದಿಲ್ಲ. |

**ಪ್ರಸ್ತಾವನೆ:**

ದಿನಾಂಕ:23.11.2005 ರಂದು ಖಚಿತ ವರ್ತಮಾನದ ಮೇರೆಗೆ ವಲಯ ಅರಣ್ಯ ಅಧಿಕಾರಿ ರಾಣೆಬೆನ್ನೂರು ತಮ್ಮ ಸಿಬ್ಬಂದಿಗಳೊಂದಿಗೆ ರಾಣೇಬೆನ್ನೂರು ಶಹರದಲ್ಲಿ ಗಸ್ತು ತಿರುಗುತ್ತಿರುವಾಗ ಸಂಜೆ 7.00 ಗಂಟೆ ಸುಮಾರಿಗೆ ಹವಲ್ದಾರ ಹೊಂಡದ ಹತ್ತಿರ ಒಂದು ಬಿಳಿ ಬಣ್ಣದ ಟ್ರ್ಯಾಕ್ಸ್ ಅನುಮಾನಾಸ್ಪದವಾಗಿ ನಿಂತಿರುವುದು ಕಂಡುಬಂದಿದ್ದರಿಂದ ಸದರಿ ವಾಹನದ ಹತ್ತಿರ ಹೋಗಿ ಬ್ಯಾಟರಿ ಸಹಾಯದಿಂದ ವಾಹನ ಒಳಗೆ ಪರಿಶೀಲಿಸಿ ನೋಡಲಾಗಿ ವಾಹನದಲ್ಲಿ ಯಾರೂ ಇರಲಿಲ್ಲ. ವಾಹನದ ಒಳಗಡೆ ಕಟ್ಟಿಗೆಯ ತುಂಡುಗಳು ಇರುವುದು ಕಂಡುಬಂತು. ಸದರಿ ವಾಹನ ಮತ್ತು ಕಟ್ಟಿಗೆಗೆ ಸಂಬಂಧಪಟ್ಟವರಿಗಾಗಿ ಸುತ್ತಲೂ ಹುಡುಕಲಾಗಿ ಸದರಿ ವಾಹನಕ್ಕೆ

ಸಂಬಂಧಪಟ್ಟವರು ಯಾರೂ ಇಲ್ಲಾ ಎಂಬುವುದನ್ನು ಖಚಿತಪಡಿಸಿಕೊಂಡು, ನಂತರ ಸದರಿ ವಾಹನದ ಬಾಗಿಲುಗಳನ್ನು ತೆಗೆದು ವಾಹನದಲ್ಲಿದ್ದ ಕಟ್ಟಿಗೆ ತುಂಡುಗಳನ್ನು ಕೆಳಗಡೆ ಇಳಿಸಿ ಪರಿಶೀಲಿಸಲಾಗಿ ಕಟ್ಟಿಗೆ ಸೈಜುಗಳು 5=0.724 ಘ.ಮೀ. ಇದ್ದು ಅವು ಹೆದ್ದಿ ಜಾತಿಯ ತುಂಡುಗಳೆಂದು ಖಚಿತಪಡಿಸಿಕೊಳ್ಳಲಾಯಿತು. ಈ ಸೈಜುಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತು ಇರಲಿಲ್ಲ. ಮತ್ತು ಈ ಹೆದ್ದಿ ತುಂಡುಗಳನ್ನು ಸಾಗಿಸಲು ಯಾವುದೇ ರಹದಾರಿ ಇರಲಿಲ್ಲ. ಸದರಿ ಬಿಳಿ ಬಣ್ಣದ ಟ್ರ್ಯಾಕ್ಸ್ ಸಂಖ್ಯೆ: ಕೆಎ14-ಎಂ-2837 ಆಗಿದ್ದು ವಾಹನದ ಚೆಸ್ಸಿ ನಂಬರ್ 1550ಜೆ2353 ಎಲ್ 97 ಇಂಜಿನ್ ನಂಬರ್-ಡಿಓ1009559 ಎಂಬುವುದಾಗಿ ಇರುತ್ತದೆ. ಆದ್ದರಿಂದ ಇದು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ (24)ಎ 104 (ಎ) 71 (ಎ) ಮತ್ತು ಕರ್ನಾಟಕ ಅರಣ್ಯ ಕಾಯಿದೆ 1969ರ ಉಪ ನಿಯಮ 144ರ ಪ್ರಕಾರ ಉಲ್ಲಂಘನೆಯಾಗಿರುವುದರಿಂದ ವಾಹನ ಮತ್ತು ಹೆದ್ದಿ ಸೈಜುಗಳನ್ನು ಮಹಜರ ಕ್ರಮದಡಿ ಇಲಾಖಾ ಪರ ಜಪ್ತಪಡಿಸಿಕೊಂಡು ರಾಣೇಬೆನ್ನೂರು ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ 11/05-06 ನ್ನು ದಾಖಲಿಸಿ ನಂತರ ಜಪ್ತ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ ಹಾವೇರಿ ವಿಭಾಗ, ಹಾವೇರಿಯವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ಇಡಲು ವಲಯ ಅರಣ್ಯ ಅಧಿಕಾರಿ ರಾಣೇಬೆನ್ನೂರವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ ವಾಹನದ ಮಾಲೀಕತ್ವದ ಬಗ್ಗೆ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:15.06.2006 ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯಮಟ್ಟದ ಪ್ರಚಲಿತ ದೈನಿಕ ಪತ್ರಿಕೆಗಳಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿನಾಂಕ: 22.06.2006 ರಂದು ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ.

ಸಹಾಯಕ ಜಿಲ್ಲಾ ಸರಕಾರಿ ಅಭಿಯೋಜಕರು ದಿನಾಂಕ: 17.08.2007 ರಂದು ವಾದ ಮಂಡಿಸಿ ಈ ವಾಹನದಲ್ಲಿ ಹೆದ್ದಿ ನಾಟಾಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯ ಅಧಿಕಾರಿ ರಾಣೇಬೆನ್ನೂರವರು ಮಹಜರ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಹೆದ್ದಿ ಜ್ಯಾತಿಯ ನಾಟಾಗಳು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲಿ ಅಥವಾ ಅವರ ಪ್ರತಿನಿಧಿಗಳಾಗಲಿ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಇಲ್ಲಿಯವರೆಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಹೆದ್ದಿ ನಾಟಾಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಇವರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು, ಆರ್. ಗೋಕುಲ, ಭಾ.ಅ.ಸೇ. ಅಧಿಕೃತ ಅಧಿಕಾರಿಗಳು, ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾವೇರಿ ವಿಭಾಗ, ಹಾವೇರಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯ ಅಧಿಕಾರಿಗಳು ರಾಣೆಬೆನ್ನೂರವರು ಜಪ್ತು ಮಾಡಿದ ವಾಹನ ಟ್ರ್ಯಾಕ್ಸ್ ಕೆ.ಎ. 14/ಎಂ - 2837 ಮತ್ತು ಈ ವಾಹನದಲ್ಲಿದ್ದ ಹೆದ್ದಿ ನಾಟಾ 5=0.724 ಘ.ಮೀ ಕರ್ನಾಟಕದ ಅರಣ್ಯ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ ಗಣಕಯಂತ್ರದಲ್ಲಿ ಮುದ್ರಿಸಿ ನಂತರ ಸರಿಪಡಿಸಿ ದಿನಾಂಕ: 17.08.2007 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕು ಬಾಧ್ಯತೆ ಅರ್ಜಿ ಸಲ್ಲಿಸದೆ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ

ಪಿ.ಆರ್. 1193 ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾವೇರಿ ವಿಭಾಗ, ಹಾವೇರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಚೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಎ.ವಿ.ಕೆ. ಕಾಲೇಜ್ ನೌಕರರ ಸಹಕಾರ ಸಂಘ ನಿ. ದಾವಣಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1. ಈ ಕಛೇರಿ ಸಮ ಸಂಖ್ಯೆ ಆದೇಶ ದಿನಾಂಕ:16.03.2007.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 14.8.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್‌ಡಿ/ಒಆರ್‌ಜಿ/5049/1977-78 ದಿನಾಂಕ:03.11.1977ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು

ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ, ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಉಲ್ಲೇಖ (2) ರ ರೀತ್ಯಾ ಶಿಫಾರಸ್ಸು ಮಾಡಿಸಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಡಿಆರ್:ಡಿವಿಜಿ:ಸಮಾಪನೆ:ಸಿಆರ್-44:2006-07, ದಿನಾಂಕ: 30ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಬಿ. ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ, ಆದ ನಾನು ಸಮಾಪನೆಗೊಂಡ ಎ.ವಿ.ಕೆ. ಕಾಲೇಜ್ ನೌಕರರ ಸಹಕಾರ ಸಂಘ ನಿ. ದಾವಣಗೆರೆ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:30.8.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 1196 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2,**
**ಬಿಜಾಪೂರ ಜಿಲ್ಲೆ : ಬಿಜಾಪೂರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ/ಎಸ್‌ಆರ್-92: 2007, ದಿನಾಂಕ: 3ನೇ ಸೆಪ್ಟೆಂಬರ್ 2007**

**ಅರ್ಜಿದಾರರು:**

1. ಶ್ರೀಮತಿ ನಜೀಮಪರವೀನ ಉರ್ಫ್ ನಸೀದಾ ಗಂಡ ಇಕಬಾಲ್ ಅಹ್ಮದ್ ಮುಜಾವರ್
2. ಮಹ್ಮದ ಜುಬೇರ ತಂದೆ ಇಕಬಾಲ್ ಅಹ್ಮದ್ ಮುಜಾವರ್
3. ತಾಹೀರ ತಂದೆ ಇಕಬಾಲ್ ಅಹ್ಮದ್ ಮುಜಾವರ್
4. ಯುಸೂಫ್ ತಂದೆ ಇಕಬಾಲ್ ಅಹ್ಮದ್ ಮುಜಾವರ್
5. ಅಮೀನಾ ತಂದೆ ಇಕಬಾಲ್ ಅಹ್ಮದ್ ಮುಜಾವರ್
6. ಅಕಬರ್‌ಸಾಬ ತಂದೆ ಮಹ್ಮದ ಕರೀಮಸಾಬಮುಜಾವರ್
7. ಮೈಮುನಿಸಾ ಗಂಡ ಅಕಬರಸಾಬ ಮುಜಾವರ್
   ಸಾ:ಹಿರೇಬೇವನೂರು, ತಾ:ಇಂಡಿ, ಜಿಲ್ಲೆ:ಬಿಜಾಪೂರ.

**ವಿರುದ್ಧ ಪ್ರತಿವಾದಿಗಳು:**

1. ದಿ ಡಿವಿಜನಲ್ ಕಂಟ್ರೋಲರ್,
   ಎನ್‌ಡಬ್ಲ್ಯೂ ಕೆ ಎಸ್ ಆರ್ ಟಿ ಸಿ,
   ಡಿವಿಜನಲ್ ಆಫೀಸ್, ಬಿಜಾಪೂರ

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಇಕ್ಬಾಲಅಹ್ಮದ್ ತಂದೆ ಅಕ್ಬರ್ ಸಾಬಮುಜಾವರ್ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 17.11.2006 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾರೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರ ಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತನ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1197 ಕಾರ್ಮಿಕ ಪರಿಹಾರ ಆಯುಕ್ತರು,

ಉಪ ವಿಭಾಗ-2 ಬಿಜಾಪೂರ ಜಿಲ್ಲೆ ಬಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪೂರ**

**ಪ್ರಕರಣ ಸಂಖ್ಯೆ:ಕಾಅಬ:ಕಾನಪ:91:2007, ದಿನಾಂಕ: 28ನೇ ಆಗಸ್ಟ್ 2007**

**ಅರ್ಜಿದಾರರು:**

ಶ್ರೀ ರಾಮಪ್ಪ ತಂದೆ ಮಲಕಾಜಪ್ಪ ಕವಸಪೂರ
ಶ್ರೀಮತಿ ನೀಲವ್ವ ಕೋಂ ರಾಮಪ್ಪ ಕವಸಪೂರ
ಸಾ:ಬಿ.ಬಾಗೇವಾಡಿ, ಜಿಲ್ಲೆ:ಬಿಜಾಪೂರ.

**ವಿರುದ್ಧ ಪ್ರತಿವಾದಿಗಳು:**

1. ಶ್ರೀ ನಾರಾಯಣ ತಂದೆ ರಾಮಚಂದ್ರ ತೇಲಿ, ಸಾ:ಮನಗೊಳಿ, ತಾ:ಬಿ. ಬಾಗೇವಾಡಿ, ಜಿಲ್ಲೆ:ಬಿಜಾಪೂರ.
2. ದಿ ಬ್ರ್ಯಾಂಚ್ ಮ್ಯಾನೇಜರ್, ರಿಲೈನ್ಸ್ ಜನರಲ್ ಇನ್ಸೂರೆನ್ಸ್ ಕಂ.ಲಿ., ಗುಲ್ಬರ್ಗಾ.

**ಪ್ರಕಟಣೆ**

ಶ್ರೀ ರಾಮಪ್ಪ ತಂದೆ ಮಲಕಾಜಪ್ಪ ಕವಸಪೂರ ಮತ್ತು ಶ್ರೀಮತಿ ನೀಲವ್ವ ಕೋಂ ರಾಮಪ್ಪ ಕವಸಪೂರ ಇವರುಗಳಾದ ತಾವು ಮೃತ ಹನಮಂತ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನಮಂತ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ನಾರಾಯಣ ತಂದೆ ರಾಮಚಂದ್ರ ತೇಲಿ ಇವರ ಟಂಟಂ ವಾಹನದಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-2 ಬಿಜಾಪೂರ ಜಿಲ್ಲೆ ಬಿಜಾಪೂರ.

ಪಿ.ಆರ್. 1198

**ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ) ಬೆಂಗಳೂರು, ರವರ ನಡಾವಳಿಗಳು**

**ವಿಷಯ:** ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ-2003, ಹಳೇ ಮದ್ರಾಸ್ ರಸ್ತೆಯಲ್ಲಿ 'ಒಳ' ಮತ್ತು 'ಹೊರ' ತನಿಖಾ ಠಾಣೆಗಳನ್ನು ಸ್ಥಾಪಿಸುವ ಬಗ್ಗೆ.

**ಪ್ರಸ್ತಾವನೆ:**

ಹಳೇಮದ್ರಾಸ್ ರಸ್ತೆ ಕಾಟನ್ ನೆಲ್ಲೂರು ಕ್ರಾಸ್ ಬಳಿ ಇಲಾಖೆಯ ತನಿಖಾ ಠಾಣೆಯೊಂದು ಕಾರ್ಯನಿರ್ವಹಿಸುತ್ತಿದೆ. ಸದರಿ ತನಿಖಾ ಠಾಣೆಯು ರಾಜ್ಯದಿಂದ ಹೊರ ಹೋಗುವಂತಹ ಮತ್ತು ಒಳ ಬರುವಂತಹ ಸರಕು ವಾಹನಗಳನ್ನು ತಪಾಸಣೆ ಮಾಡುತ್ತಿದೆ. ಒಳಬರುವಂತಹ ಮತ್ತು ಹೊರ ಹೋಗುವಂತಹ ಸರಕು ವಾಹನಗಳನ್ನು ತನಿಖೆ ಮಾಡಲು ಪ್ರತ್ಯೇಕ ತನಿಖಾ ಠಾಣೆಗಳನ್ನು ಸ್ಥಾಪಿಸುವ ಅವಶ್ಯಕತೆಯನ್ನು ಮನಗಂಡು, ಇಲಾಖೆಯು, ಸ್ವಂತ ಕಟ್ಟಡಗಳನ್ನು ಈ ಕೆಳಕಂಡ ಸ್ಥಳಗಳಲ್ಲಿ ನಿರ್ಮಿಸಲಾಗಿರುತ್ತದೆ.

1. ಹಳೇ ಮದ್ರಾಸ್ ರಸ್ತೆಯಲ್ಲಿರುವ ನಿಂಬೇಕಾಯಿಪುರ, ಬಿದರಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು, ಸರ್ವೆ ನಂ.28/1 ಮತ್ತು 28/2, ಮತ್ತು
2. ಹಳೇ ಮದ್ರಾಸ್ ರಸ್ತೆಯಲ್ಲಿರುವ ಹೊಸಕೋಟೆ, ಕಸಬಾ ಹೋಬಳಿ ಸರ್ವೆ ನಂ. 333/1 ಮತ್ತು 333/2.

ಜಂಟಿ ಆಯುಕ್ತರು (ಜಾಗೃತಿ) ಬೆಂಗಳೂರು ದಿನಾಂಕ: 02.02.2007ರ ತಮ್ಮ ಪತ್ರದಲ್ಲಿ ಇಲಾಖೆಯ ಸ್ವಂತ ಕಟ್ಟಡಗಳಿಗೆ, ಹಳೇಮದ್ರಾಸ್ ರಸ್ತೆ ಕಾಟನ್ ನೆಲ್ಲೂರು ಕ್ರಾಸ್ ಬಳಿ ಕಾರ್ಯನಿರ್ವಹಿಸುತ್ತಿರುವ ತನಿಖಾ ಠಾಣೆಯನ್ನು ಸ್ಥಳಾಂತರಿಸಿ, ಒಳಬರುವ ಮತ್ತು ಹೊರ ಹೋಗುವ ವಾಹನಗಳ ತಪಾಸಣೆಗೆ ಪ್ರತ್ಯೇಕವಾಗಿ ಈ ಕೆಳಕಾಣಿಸಿದಂತೆ ತನಿಖಾ ಠಾಣೆ ಕಾರ್ಯನಿರ್ವಹಿಸಲು, ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ, 2003ರ ಸೆಕ್ಷನ್ 53(1)ರ ಪ್ರಕಾರ, ಅಧಿಸೂಚನೆಯನ್ನು ಹೊರಡಿಸಬೇಕಾದ ಅವಶ್ಯಕತೆ ಇರುತ್ತದೆಯೆಂದು ವರದಿ ಮಾಡಿರುತ್ತಾರೆ.

| | | |
|---|---|---|
| 1 | ರಾಜ್ಯದಿಂದ ಹೊರಹೋಗುವ ಸರಕು ವಾಹನಗಳನ್ನು ತಪಾಸಣೆ ಮಾಡಲು ಹಳೇ ಮದ್ರಾಸ್ ರಸ್ತೆ-ಹೊರ ತನಿಖಾ ಠಾಣೆ | ಹಳೇ ಮದ್ರಾಸ್ ರಸ್ತೆಯಲ್ಲಿರುವ ನಿಂಬೇಕಾಯಿಪುರ, ಬಿದರಳ್ಳಿ ಹೋಬಳಿ ಹೊಸಕೋಟೆ ತಾಲ್ಲೂಕು ಸರ್ವೆ ನಂ.28/1 ಮತ್ತು 28/2 ರಲ್ಲಿ |
| 2 | ಹೊರ ರಾಜ್ಯಗಳಿಂದ ಒಳಬರುವ ಸರಕುವಾಹನಗಳನ್ನು ತಪಾಸಣೆ ಮಾಡಲು ಹಳೇ ಮದ್ರಾಸ್ ರಸ್ತೆ - ಒಳ ತನಿಖಾ ಠಾಣೆ | ಹಳೇ ಮದ್ರಾಸ್ ರಸ್ತೆಯಲ್ಲಿರುವ ಹೊಸಕೋಟೆ, ಕಸಬಾ ಹೋಬಳಿ, ಸರ್ವೆ ನಂ. 333/1 ಮತ್ತು 333/2 ರಲ್ಲಿ. |

ಜಂಟಿ ಆಯುಕ್ತರು (ಜಾಗೃತಿ) ಬೆಂಗಳೂರು ರವರ ಕೋರಿಕೆ ಸಮಂಜಸವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ.ವಾತೆಅಆ (ಗು.ಸ) ವಾತೆಅ/ಸಿಆರ್-90/06.07, ದಿನಾಂಕ: 16ನೇ ಆಗಸ್ಟ್ 2007**

ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ 2003ರ ಕಲಂ 53(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರದಂತೆ, ಹಳೇ ಮದ್ರಾಸ್ ರಸ್ತೆ ಕಾಟನ್ ನೆಲ್ಲೂರು ಕ್ರಾಸ್ ಬಳಿ ಕಾರ್ಯನಿರ್ವಹಿಸುತ್ತಿರುವ ಇಲಾಖೆಯ ತನಿಖಾ ಠಾಣೆಯನ್ನು ತಕ್ಷಣದಿಂದ ರದ್ದುಗೊಳಿಸಲಾಗಿದೆ ಮತ್ತು, ಹಳೇ ಮದ್ರಾಸ್ ರಸ್ತೆಯಲ್ಲಿರುವ ನಿಂಬೇಕಾಯಿಪುರ, ಬಿದರಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು, ಸರ್ವೆ ನಂ.28/1 ಮತ್ತು 28/2 ರಲ್ಲಿ, ಹೊಸದಾಗಿ ನಿರ್ಮಿಸಲಾಗಿರುವ ಇಲಾಖೆಯ ಸ್ವಂತ ಕಟ್ಟಡದಲ್ಲಿ, ರಾಜ್ಯದಿಂದ ಹೊರಹೋಗುವ ಸರಕು ವಾಹನಗಳನ್ನು ತಪಾಸಣೆ ಮಾಡಲು ಹಾಗೂ ಹಳೇ ಮದ್ರಾಸ್ ರಸ್ತೆಯಲ್ಲಿರುವ ಹೊಸಕೋಟೆ, ಕಸಬಾ ಹೋಬಳಿ, ಸರ್ವೆ ನಂ. 333/1 ಮತ್ತು 333/2 ರಲ್ಲಿ, ಹೊಸದಾಗಿ ನಿರ್ಮಿಸಲಾಗಿರುವ ಇಲಾಖೆಯ ಸ್ವಂತ ಕಟ್ಟಡದಲ್ಲಿ, ಹೊರ ರಾಜ್ಯಗಳಿಂದ ಒಳಬರುವ ಸರಕು ವಾಹನಗಳನ್ನು ತಪಾಸಣೆ ಮಾಡಲು, ತನಿಖಾ ಠಾಣೆಗಳನ್ನು ಸ್ಥಾಪಿಸಿ ಕಾರ್ಯನಿರ್ವಹಿಸಲು ಆದೇಶಿಸಲಾಗಿದೆ. ಅಲ್ಲದೆ, ತನಿಖಾ ಠಾಣೆಯಲ್ಲಿ ಅಂತರ ರಾಜ್ಯ ಸರಕು ಸಾಗಾಣಿಕೆ ವಾಹನಗಳಿಗೆ ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ ಕಾಯ್ದೆ 2003ರ ಕಲಂ 54ರ ಅನ್ವಯ ರಹದಾರಿ ಪತ್ರಗಳನ್ನು ನೀಡಲು ಮತ್ತು ಸ್ವೀಕರಿಸಲು ಸಹ ಅನುಮತಿಯನ್ನು ಈ ಮೂಲಕ ನೀಡಲಾಗಿದೆ.

ಈ ಆದೇಶವು ದಿನಾಂಕ: 17.08.2007 ರಿಂದ ಜಾರಿಗೆ ಬರುತ್ತದೆ.

**ಬಿ.ಎ. ಹರೀಶ್ ಗೌಡ**

ಪಿ.ಆರ್. 1200 ವಾಣಿಜ್ಯ ತೆರಿಗೆ ಆಯುಕ್ತರು ಕರ್ನಾಟಕ, ಬೆಂಗಳೂರು.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003 - Clarification under Section 59(4) regarding the rate of tax 'wood burner cooking stove'.

**Ref:** Application dated 05.07.2007 of M/s Qpre Energy (India) Private Limited, No.129/5, 6th Main, I Stage, W.O.C.Road, Mahaganapathi Nagar, Bangalore-560 044.

In its application cited at reference above, M/s Qpre Energy (India) Private Limited, No.129/5, 6th Main, I Stage, W.O.C.Road, Mahaganapathi Nagar, Bangalore-560 044 has sought clarification regarding the rate of tax applicable on 'wood burner cooking stove'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.113/07-08, Dated: 18th August 2007**

It is hereby clarified that 'wood burner cooking stove' is taxable at 12.5% under Section 4(1) (b) of the Karnataka Value Added Tax Act, 2003.

**B.A. HARISH GOWDA**

P.R. 1201 Commissioner of Commercial Taxes, (Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003 - Clarification under Section 59(4) regarding the rate of tax applicable on 'lead acid batteries and parts thereof supplied to railways and defence establishment.

**Ref:** Application dated 27.06.2007 of M/s Celtek Batteries Private Limited, 471-B, Peenya Industrial Area, IV Phase, Bangalore-560 058.

In its application dated 27.06.2007 cited above, M/s Celtek Batteries Private Limited, 471-B, Peenya Industrial Area, IV Phase, Bangalore-560 058 has sought clarification regarding rate of tax applicable on 'lead acid batteries and parts thereof' supplied to railways and defence establishment.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.106/07-08, Dated: 18th August 2007**

It is hereby clarified that 'Lead Acid Batteries' are taxable at 12.5% under Section 4(1) (b) of the Karnataka Value Added Tax Act, 2003, irrespective of to whom they are sold.

**B.A. HARISH GOWDA**
Commissioner of Commercial Taxes,
(Karnataka), Bangalore.

P.R. 1202

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ**

**ಸಂ:ಡಿಬಿಸಿಎಂ:ಬೆಂಗ್ರಾ:ಬಿ3:ಸಿಆರ್-2:2007-08, ದಿನಾಂಕ: 4ನೇ ಸೆಪ್ಟೆಂಬರ್ 2007**

**ವಿಷಯ:** 2007-08ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂ:ಸಕಇ 205 ಬಿಎಂಎಸ್ 99, ದಿನಾಂಕ:7.10.1999.
2. ಸರ್ಕಾರಿ ಆದೇಶ ಸಂ: ಎಸ್ ಡಬ್ಲ್ಯುಎಲ್ 68 ಎಸ್.ಇ.ಡಬ್ಲ್ಯು 89, ದಿನಾಂಕ:2.11.1990.
3. ಈ ಕಛೇರಿ ಪ್ರಕಟಣೆ ಸಮಸಂಖ್ಯೆ ದಿನಾಂಕ:18.5.2007.

2007-08ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಿ ದಿನಾಂಕ:18.5.2007ರೊಳಗೆ ಸಲ್ಲಿಸುವಂತೆ ಉಲ್ಲೇಖ (3)ರಲ್ಲಿ ಪ್ರಕಟಣೆ ಹೊರಡಿಸಲಾಗಿತ್ತು. ಅರ್ಜಿಗಳು ಬಾರದೇ ಇರುವುದರ ಪ್ರಯುಕ್ತ ಕಡೆಯ ದಿನಾಂಕವನ್ನು ದಿನಾಂಕ:17.9.2007 ರವರೆವಿಗೆ ವಿಸ್ತರಿಸಲಾಗಿದೆ. ಅರ್ಹ ಮತೀಯ ಅಲ್ಪಸಂಖ್ಯಾತರಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ವೀದಿ, ಬೆಂಗಳೂರು, ಇವರ ಕಚೇರಿಯಲ್ಲಿ ದಿನಾಂಕ:17.9.2007 ರೊಳಗೆ ಸಲ್ಲಿಸುವುದು.

**ನಿಬಂಧನೆಗಳು:**

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿಯನ್ನು ಮುಗಿಸಿ 2 (ಎರಡು) ವರ್ಷಗಳು ಮೀರಿರಬಾರದು.
2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು, ಪಾರ್ಸಿ ಹಾಗೂ ಬೌದ್ಧರು ಇವುಗಳಿಗೆ ಸೇರಿರಬೇಕು. ಹಾಗೂ ಸರ್ಕಾರದಿಂದ ನಿಗಧಿಪಡಿಸಲಾದ ಜಾತಿ ಆದಾಯ ಘೋಷಣಾ ಪತ್ರ ಹಾಗೂ ಪರಿಶೀಲನಾ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿ ಮಾಡಿ, ಸಂಬಂಧಿಸಿದ ಅಧಿಕಾರಿಗಳ ದೃಢೀಕರಣದೊಂದಿಗೆ ಮೂಲ ಪ್ರಮಾಣ ಪತ್ರವನ್ನು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.
3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.
4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳನ್ನು ಮೀರಿರಬಾರದು. ಅಂದರೆ ವರ್ಗ-1ರ ಅಭ್ಯರ್ಥಿಗಳಿಗೆ 1 ವರ್ಷ ರಿಯಾಯಿತಿ ಇದ್ದು ಅವರುಗಳಿಗೆ ವಯಸ್ಸು 31 ವರ್ಷಗಳು ಮೀರಿರಬಾರದು.
5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ 15,000/-ಕ್ಕೆ ಮೀರಿರಬಾರದು. ಆದರೆ ವರ್ಗ-1 ರಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ

ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ/ರಾಜ್ಯ ಸರ್ಕಾರದ ಕೆಲಸ ಸಿಕ್ಕಿದ ಅಭ್ಯರ್ಥಿಗಳಿಗೆ ಈ ಬಗ್ಗೆ ರಿಯಾಯಿತಿ ಇರುತ್ತದೆ.

6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ತಿಂಗಳಿಗೆ ರೂ.1000/-ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್/ಸರ್ಕಾರಿ ವಕೀಲರು ಅಥವಾ 20(ಇಪ್ಪತ್ತು) ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ಧನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10ರ ಬಡ್ಡಿಯೊಂದಿಗೆ ಭೂ ಕಂದಾಯದ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ:ಅಂಬೇಡ್ಕರ್ ಬೀದಿ, ಬೆಂಗಳೂರು-1 ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯ ಸಂದರ್ಶನದ ದಿನಾಂಕ ಹಾಗೂ ಸ್ಥಳವನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಿಂದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮ ದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ.ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

14) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 17.9.2007.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ
ಇಲಾಖೆ, ಬೆಂಗಳೂರು (ಗ್ರಾ) ಜಿಲ್ಲೆ, ಬೆಂಗಳೂರು.

ಪಿ.ಆರ್. 1204

## DEPARTMENT OF PORTS & INLAND WATER TRANSPORT, KARWAR
### AMENDMENT-III
### No. PIWT-22/DEV-II/2007, Dated: 7th September 2007

**Sub:** Modification of calender of Events.

**Ref:** This Office invitation for Qualification Reference No.PIWT-22/DEV-II/2007 dated: 20.08.2007 & 1.09.2007.

The sale of the Request For Qualification (RFQ) documents for DEVELOPMENT OF MODERN DEEP SEA PORT AT KARWAR ON THE COASTLINE OF KARNATAKA MARITIME STATE on Build Own Operate and Transfer (BOOT) basis has been extended upto 16:00 hrs. IST on 29.09.2007 as per the Government of Karnataka Notification No.PWD 140 SO/FC 2003 dated: 1.09.2003.

All other Terms and Conditions and Other particulars remain unaltered.

DIRECTOR OF PORTS & INLAND
WATER TRANSPORT KARWAR.

P.R. 1205

## ಸಹಕಾರ ಇಲಾಖೆ
### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಚೇರಿಯ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಶೀಫಾ ಸಹಕಾರಿ ವೈದ್ಯಕೀಯ ಆಸ್ಪತ್ರೆ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1. ಈ ಕಛೇರಿ ಸಮ ಸಂಖ್ಯೆ ಆದೇಶ ದಿನಾಂಕ:14.03.2007.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 28.8.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಕಛೇರಿ ಆದೇಶ ಸಂಖ್ಯೆ:ಎಆರ್-31/ ಆರ್‌ಜಿಎನ್/29092/2000-01 ದಿನಾಂಕ:14.02.2000ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಪೂರ್ಣವಾಗಿ

ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ, ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಉಲ್ಲೇಖ (2) ರ ರೀತ್ಯಾ ಶಿಫಾರಸ್ಸು ಮಾಡಿಸಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಡಿಆರ್:ಡಿವಿಜಿ:ಸಮಾಪನೆ:ಸಿಆರ್-47:2006-07, ದಿನಾಂಕ: 30ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಬಿ. ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ, ಆದ ನಾನು ಸಮಾಪನೆಗೊಂಡ ಶೀಫಾ ಸಹಕಾರಿ ವೈದ್ಯಕೀಯ ಆಸ್ಪತ್ರೆ ನಿ., ದಾವಣಗೆರೆ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:30.8.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 1208 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಕೃತ ಜ್ಞಾಪನ**

**ನಂ.ಎಲ್.ಎನ್.ಡಿ (ಎನ್) ಸಿ.ಆರ್:167/06-07, ದಿನಾಂಕ: 14ನೇ ಆಗಸ್ಟ್ 2007**

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಬೆತ್ತನಗೆರೆ ಗ್ರಾಮದ ದಲಿತ ಕಾಲೋನಿಗೆ ಸ್ಮಶಾನಕ್ಕಾಗಿ ಜಮೀನು ಮಂಜೂರಾತಿ ಕೋರಿ ಗ್ರಾಮಸ್ಥರು ಸಲ್ಲಿಸಿರುವ ಮನವಿ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂ.ಆರ್.ಡಿ. 741 ಎಲ್.ಜಿ.ಬಿ. 2007, ದಿನಾಂಕ: 18.7.2007.
2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂ.ಎಲ್.ಎನ್.ಡಿ:ಸಿ.ಆರ್:177/06-07, ದಿನಾಂಕ:7.2.2007.

ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಬೆತ್ತನಗೆರೆ ಗ್ರಾಮದ ದಲಿತರು ದಿನಾಂಕ:2.9.2006 ರಂದು ಈ ಕಛೇರಿಗೆ ಮನವಿ ಸಲ್ಲಿಸಿ ಬೆತ್ತನಗೆರೆ ಗ್ರಾಮದಲ್ಲಿ ಸುಮಾರು 200 ರಿಂದ 250 ಜನ ದಲಿತರು ವಾಸ ಮಾಡುತ್ತಿದ್ದು, ಈ ಕಾಲೋನಿಯಲ್ಲಿ ಸ್ಮಶಾನ ಇರುವುದಿಲ್ಲ. ಆದ್ದರಿಂದ 2.00 ಎಕರೆ ಜಮೀನನ್ನು ದಲಿತರ ಸ್ಮಶಾನಕ್ಕಾಗಿ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಈ ಬಗ್ಗೆ ಉಲ್ಲೇಖ (2)ರಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರಿಂದ ವರದಿ ಪಡೆಯಲಾಗಿದ್ದು, ಬೆತ್ತನಗೆರೆ ಗ್ರಾಮದಲ್ಲಿ ಒಟ್ಟು 40 ರಿಂದ 50 ದಲಿತ ನಿವಾಸಿಗಳ ಮನೆಗಳಿದ್ದು, 250 ಜನಸಂಖ್ಯೆ ಇರುತ್ತದೆ. ಬೆತ್ತನಗೆರೆ ಗ್ರಾಮದಲ್ಲಿ ಯಾವುದೇ ಸರ್ಕಾರಿ ಸ್ಮಶಾನವಿರುವುದಿಲ್ಲ ಹಾಗೂ ದಲಿತವರ್ಗದವರಿಗೆ ಮತ್ತು ಸಾರ್ವಜನಿಕರಿಗೆ ಸ್ಮಶಾನವಿಲ್ಲದೆ ಶವ ಸಂಸ್ಕಾರ ಮಾಡಲು ತುಂಬಾ ಅನಾನುಕೂಲವಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಬೆತ್ತನಗೆರೆ ಗ್ರಾಮದ ಸ.ನಂ.66ರಲ್ಲಿ 1.08 ಎಕರೆ:ಗುಂಟೆ ಸರ್ಕಾರಿ ಗುಂಡು ತೋಪು ಜಮೀನಿದ್ದು, ಬೆತ್ತನಗೆರೆ ಹಾಲು ಉತ್ಪಾದಕರ ಸಂಘಕ್ಕೆ 0.10 ಗುಂಟೆ ಜಮೀನು ಮಂಜೂರಾಗಿರುತ್ತದೆ. ಹಾಗೂ 0.04 ಗುಂಟೆ ಜಮೀನಿನಲ್ಲಿ ಸರ್ಕಾರಿ ರಸ್ತೆ ಹಾದು ಹೋಗಿದ್ದು, 0.34 ಗುಂಟೆ ಜಮೀನು ಖಾಲಿ ಇರುತ್ತದೆ. ಈ ಜಮೀನು ಬೆಂಗಳೂರು ಮಹಾನಗರ ಪಾಲಿಕೆಯಿಂದ 18 ಕಿ.ಮೀ ಒಳಗಡೆ ಇದ್ದು, ಹಸಿರು ಪಟ್ಟಿಯಿರುವುದಿಲ್ಲ. ಮತ್ತು ಗ್ರಾಮದಿಂದ ಅರ್ಧ ಕಿ.ಮೀ.ದೂರದಲ್ಲಿದ್ದು, ಅರ್ಜಿದಾರರಾದ ದಲಿತ ನಿವಾಸಿಗಳಿಗೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸಿರುವ ಬಗ್ಗೆ ಯಾವುದೇ ತಂಟೆ ತಕರಾರು ಇರುವುದಿಲ್ಲವೆಂದು ತಹಶೀಲ್ದಾರ್ ವರದಿ ಸಲ್ಲಿಸಿರುತ್ತಾರೆ.

ತಹಶೀಲ್ದಾರ್ ವರದಿಯಂತೆ ಬೆತ್ತನಗೆರೆ ಗ್ರಾಮದ ಸ.ನಂ. 66 ರಲ್ಲಿ 0.34 ಗುಂಟೆ ಜಮೀನನ್ನು ಬೆತ್ತನಗೆರೆ ಕಾಲೋನಿ ದಲಿತ ನಿವಾಸಿಗಳಿಗೆ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಕಾಯ್ದಿರಿಸಲು ಸೂಕ್ತ ಆದೇಶ ಕೋರಿ ಈ ಕಛೇರಿಯಿಂದ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಬೆತ್ತನಗೆರೆ ಗ್ರಾಮದ ಸ.ನಂ.66 ರಲ್ಲಿ 0.34 ಗುಂಟೆ ಜಮೀನನ್ನು ಬೆತ್ತನಗೆರೆ ದಲಿತ ನಿವಾಸಿಗಳಿಗೆ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಕಾಯ್ದಿರಿಸಲು ಸರ್ಕಾರವು ಪೂರ್ವಾನುಮೋದನೆಯನ್ನು ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ಬೆತ್ತನಗೆರೆ ಗ್ರಾಮದ ಸ.ನಂ.66 ರಲ್ಲಿ 0.34 ಗುಂಟೆ ಜಮೀನನ್ನು ಬೆತ್ತನಗೆರೆ ದಲಿತ ನಿವಾಸಿಗಳಿಗೆ ಸ್ಮಶಾನಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಕಾಯ್ದಿರಿಸಿದೆ ಮತ್ತು ಸ್ಮಶಾನದ ಉಸ್ತುವಾರಿಯನ್ನು ಸಂಬಂಧಪಟ್ಟ ದಾಸನಪುರ ಗ್ರಾಮಪಂಚಾಯಿತಿಗೆ ನಿರ್ವಹಿಸಲು ಆದೇಶಿಸಿದೆ.

ಷರತ್ತುಗಳು

1) ಕಾಯ್ದಿರಿಸಿದ ಜಮೀನನ್ನು ನಕ್ಷೆಯಂತೆ ಖಚಿತಪಡಿಸಿಕೊಂಡು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಗ್ರಾಮ ಪಂಚಾಯಿತಿಗೆ ವರ್ಗಾಯಿಸತಕ್ಕದ್ದು.
2) ಗ್ರಾಮ ಪಂಚಾಯಿತಿರವರು ಸದರಿ ಜಮೀನಿನಲ್ಲಿ ಯಾವುದೇ ಕಟ್ಟಡ ವಗೈರೆ ನಿರ್ಮಿಸಬೇಕಾದಲ್ಲಿ ತಹಶೀಲ್ದಾರ್ ರವರಿಂದ ಅನುಮತಿಯನ್ನು ಪಡೆಯತಕ್ಕದ್ದು.
3) ಪ್ರಶ್ನಿತ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇದ್ದಲ್ಲಿ ಸದರಿ ಆದೇಶವನ್ನು ಯಾವುದೇ ತಿಳುವಳಿಕೆ ನೀಡದೆ ರದ್ದುಪಡಿಸಲಾಗುವುದು.
4) ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಸ್ಮಶಾನಕ್ಕೆ ಕಾಯ್ದಿರಿಸುವ ಬಗ್ಗೆ ಕಂದಾಯ ದಾಖಲೆಯಲ್ಲಿ ನಮೂದಿಸಿಕೊಳ್ಳತಕ್ಕದ್ದು.

ವಿಶೇಷ ಜಿಲ್ಲಾಧಿಕಾರಿಗಳು,

ಪಿ.ಆರ್. 1211 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಚೇರಿಯ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಭದ್ರಾ ಚಾನೆಲ್ ಪಿ.ಡಬ್ಲ್ಯೂ.ಡಿ. ನೌಕರರ ಸಹಕಾರ ಸಂಘ ನಿ. ದಾವಣಗೆರೆ ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1. ಈ ಕಛೇರಿ ಸಮ ಸಂಖ್ಯೆ ಆದೇಶ ದಿನಾಂಕ:14.03.2007.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ: 07.8.2007.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ, ಇವರ ಕಛೇರಿ ಆದೇಶ ಸಂಖ್ಯೆ:ಎಆರ್‌ಸಿ/230/ ದಿನಾಂಕ:03.07.1965 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ, ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ, ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಶಿಫಾರಸ್ಸು ಮಾಡಿಸಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

### ಆದೇಶ

**ಸಂಖ್ಯೆ:ಡಿಆರ್:ಡಿವಿಜಿ:ಸಮಾಪನೆ:ಸಿಆರ್-45:2006-07, ದಿನಾಂಕ: 30ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರ ಪ್ರಕಾರ ದತ್ತವಾದ ಅಧಿಕಾರದನ್ವಯ ಬಿ. ಕುಬೇರಪ್ಪ ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ, ಆದ ನಾನು ಸಮಾಪನೆಗೊಂಡ ಭದ್ರಾ ಚಾನಲ್ ಪಿ.ಡಬ್ಲ್ಯೂಡಿ ನೌಕರರ ಸಹಕಾರ ಸಂಘ ನಿ. ದಾವಣಗೆರೆ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33 (ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:30.8.2007 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 1212 ದಾವಣಗೆರೆ ಜಿಲ್ಲೆ, ದಾವಣಗೆರೆ.

### ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ಬಾಪೂಜಿ ಗೃಹ ನಿರ್ಮಾಣ ಸ ಸಂ ನಿ, ಸೈನ್ಸ್ ಅಂಡ್ ಟೆಕ್ಸ್‌ಟೈಲ್ಸ್ ಬ್ಲಾಕ್, ಬಿ ಐ ಇ ಟಿ ಆವರಣ ಶ್ಯಾಮನೂರು ರಸ್ತೆ ದಾವಣಗೆರೆ ಈ ಸಂಘವನ್ನು ಪುನಃಶ್ಚೇತನಗೊಳಿಸುವ ಕುರಿತು.

**ಉಲ್ಲೇಖ:** 1. ಸ ಸಂ.ಗಳ ನಿರೀಕ್ಷಕರು ವೃತ್ತ-2 ದಾವಣಗೆರೆ ಇವರ ಪತ್ರ ಸಂ:ಸಸಂನಿ:ವೃತ್ತ-2:ಸಮಾಪನೆ: ಬಾಪೂಜಿಗೃನಿಸಸಂ:ಸಿಆರ್:06-07. ದಿನಾಂಕ:7.3.2007.
2. ಸ ಸಂ.ಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಪತ್ರ ಸಂ:ಸನಿ31: ಎಲ್‌ಕ್ಯೂಡಿ:ಸಿಆರ್-13:ಬಾಪೂಜಿ ಗೃನಿಸಸಂನಿ:2006-07 ದಿ:12.3.07.
3. ಈ ಕಚೇರಿ ಪತ್ರ ಸಂ:ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-44:06-07 ದಿ:14.3.07.

4. ಸ ಸಂ.ಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ರವರ ಪತ್ರ ಸಂ: ಸನಿ31:ಸಮಾಪನೆ:ಸಿಆರ್-13:ಬಾಪೂಜಿಗೃನಿಸಸಂನಿ:06-07 ದಿ:23.8.07.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಉಲ್ಲೇಖ (1) ಮತ್ತು (2)ರ ಪ್ರಸ್ತಾವನೆ ಹಾಗೂ ಶಿಫಾರಸ್ಸಿನ ರೀತ್ಯಾ ವಿಷಯಸೂಚಿತ ಸಂಘವನ್ನು ಈ ಕಚೇರಿ ಪತ್ರ ಉಲ್ಲೇಖ (3)ರ ರೀತ್ಯಾ ಸಮಾಪನೆಗೊಳಿಸಲಾಗಿತ್ತು. ಪ್ರಸ್ತಾವನೆಯ ಪ್ರಕಾರ ವಿಷಯಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿದ್ದು, ಸಂಘದ ಆಡಳಿತ ಮಂಡಳಿ ಸದಸ್ಯರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲರಾಗಿರುತ್ತಾರೆಂದು ತಿಳಿದು ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಮತ್ತು ಸಹಕಾರ ಸಂಘಗಳ ನಿರೀಕ್ಷಕರು 2ನೇ ವೃತ್ತ ಸಹಾಯಕ ನಿಬಂಧಕರ ಕಚೇರಿ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು. ದಿ:13.8.07 ರಂದು ಶ್ರೀ ಕಾಸಲ್ ಎಸ್.ವಿಟ್ಟಲ್ ಇವರ ಅಧ್ಯಕ್ಷತೆಯಲ್ಲಿ ಜರುಗಿದ ಸಂಘದ ಸದಸ್ಯರ ಸಭೆಯಲ್ಲಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಕಾರ್ಯಚಟುವಟಿಕೆಗಳನ್ನು ಮುಂದುವರೆಸಿಕೊಂಡು ಹೋಗಲು 6 ವರ್ಷಗಳ ಕ್ರಿಯಾ ಯೋಜನೆಯನ್ನು ಸಿದ್ದಪಡಿಸಿಕೊಂಡಿರುತ್ತಾರೆ. ಅದರಂತೆ ಕ್ರಿಯಾ ಯೋಜನೆಯ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡುವಂತೆ ಸರ್ವಾನುಮತದಿಂದ ಇಲಾಖಾಧಿಕಾರಿಗಳನ್ನು ಕೋರಲು ತೀರ್ಮಾನ ಕೈಗೊಂಡಿರುತ್ತಾರೆ.

ಅದು ಅಲ್ಲದೆ ಸ ಸಂ.ಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ರವರು ಉಲ್ಲೇಖ (4) ರಲ್ಲಿ ಸಂಘದ ಸಮಾಪನಾ ಆದೇಶವನ್ನು ರದ್ದುಪಡಿಸಿ ಸದರಿ ಸಂಘವನ್ನು ಸದಸ್ಯರ ಹಿತ ದೃಷ್ಟಿಯಿಂದ ಪುನಃಶ್ಚೇತನಕ್ಕೆ ಅವಕಾಶ ಮಾಡಿಕೊಡಲು ಕೋರಿರುತ್ತಾರೆ. ದಿ:13.8.07 ರ ಸಭಾ ನಡವಳಿಕೆಯನ್ನು ಸಲ್ಲಿಸಿರುತ್ತಾರೆ ಮತ್ತು ಸಂಘದ ಅಧ್ಯಕ್ಷರು ಕಾರ್ಯದರ್ಶಿಯವರು ಸಂಘವನ್ನು ಪುನಃಶ್ಚೇತನಗೊಳಿಸಿಕೊಡುವಂತೆ ದಿ: 20.8.07ರ ಪತ್ರದಲ್ಲಿ ಸ.ಸಂ. ಸಹಾಯಕ ನಿಬಂಧಕರು, ದಾವಣಗೆರೆ ಉಪ-ವಿಭಾಗ, ದಾವಣಗೆರೆ ರವರನ್ನು ಕೋರಿರುತ್ತಾರೆ. ಈ ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘದ ಎಲ್ಲಾ ನ್ಯೂನತೆಗಳನ್ನು 6 ತಿಂಗಳ ಅವಧಿಯೊಳಗೆ ಸರಿಪಡಿಸಿಕೊಳ್ಳತಕ್ಕದ್ದು, ತಪ್ಪಿದಲ್ಲಿ ಸಂಘವನ್ನು ನೇರವಾಗಿ ಸಮಾಪನೆಗೊಳಿಸಲಾಗುವುದು. ಪ್ರಸ್ತಾವನೆಯಲ್ಲಿ ಸಲ್ಲಿಸಿದ 6 ವರ್ಷಗಳ ಕ್ರಿಯಾ ಯೋಜನೆಯ ರೀತ್ಯಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಗತಿ ಸಾಧಿಸುವ ಷರತ್ತಿಗೆ ಒಳಪಟ್ಟು ಈ ಸಂಘವನ್ನು ಪುನಃಶ್ಚೇತನಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್-44:06-07, ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2007**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ.ಕುಬೇರಪ್ಪ, ಕೆ.ಸಿ.ಎಸ್, ಸ ಸಂ.ಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಆದ ನಾನು ಸಮಾಪನೆಗೊಂಡಿರುವ ಶ್ರೀ ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ, ಸೈನ್ಸ್ ಅಂಡ್ ಟೆಕ್ಸ್‌ಟೈಲ್ಸ್ ಬ್ಲಾಕ್ ಬಿ ಐ ಇ ಟಿ ಆವರಣ ಶ್ಯಾಮನೂರು ರಸ್ತೆ, ದಾವಣಗೆರೆ ಇದರ ಉಲ್ಲೇಖ (3)ರ ಸಮಾಪನಾದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಸಂಘದ ಸಮಾಪನಾಧಿಕಾರಿಯಾದ ಸಹಕಾರ ಸಂಘಗಳ ನಿರೀಕ್ಷಕರು, ವೃತ್ತ-2, ಸ ಸಂ.ಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತಾರೆ. ಈ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:30.8.2007 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 1213

**ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಕಛೇರಿ ಬೆಂಗಳೂರು ಇವರ ನಡವಳಿಗಳು**

**ವಿಷಯ:** ಕಾನೂನು ಮಾಪನಶಾಸ್ತ್ರ ನಿರೀಕ್ಷಕರು ನಂಜನಗೂಡು, ಹಾಗೂ ಹುಣಸೂರು ಇವರ ಕ್ಷೇತ್ರ ವ್ಯಾಪ್ತಿಯ ಮರುವಿಂಗಡಣೆ ಬಗ್ಗೆ.

**ಉಲ್ಲೇಖ:** ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು, ಮೈಸೂರು ಇವರ ಪತ್ರದ ಸಂಖ್ಯೆ:ಕಾಮಾಇ/ಉನಿಮೈ/ಕ್ಷೇತ್ರವ್ಯಾಪ್ತಿ/257/07-08, ದಿನಾಂಕ:10.07.2007.

**ಪ್ರಸ್ತಾವನೆ:**

ಕಾನೂನು ಮಾಪನಶಾಸ್ತ್ರ ಉಪನಿಯಂತ್ರಕರು, ಮೈಸೂರು ವಿಭಾಗ, ಮೈಸೂರು ಇವರು, ಮೇಲೆ ಓದಲಾದ ಪತ್ರದಲ್ಲಿ ಕಾನೂನು ಮಾಪನಶಾಸ್ತ್ರ ನಿರೀಕ್ಷಕರು ನಂಜನಗೂಡು ಹಾಗೂ ಹುಣಸೂರು ಕಛೇರಿಗಳ ಸತ್ಯಾಪನೆ ಮತ್ತು ಮುದ್ರೆ ಹಾಗೂ ಕ್ಷೇತ್ರ ವ್ಯಾಪ್ತಿಗಳ ಸಮಾನಾಂತರವಾದ ಕೆಲಸ ಕಾರ್ಯಗಳ ಹಂಚಿಕೆ ದೃಷ್ಟಿಯಿಂದ ಕ್ಷೇತ್ರ ವ್ಯಾಪ್ತಿ ಮರು ವಿಂಗಡಣೆ ಮಾಡುವಂತೆ ವಿನಂತಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಕಾನೂನು ಮಾಪನಶಾಸ್ತ್ರ ನಿರೀಕ್ಷಕರು ಹುಣಸೂರು, ಕಛೇರಿ ವ್ಯಾಪ್ತಿಗೆ, ಹುಣಸೂರು, ಪಿರಿಯಾಪಟ್ಟಣ, ಕೆ.ಆರ್. ನಗರ, ಹೆಚ್.ಡಿ. ಕೋಟೆ ತಾಲ್ಲೂಕುಗಳು ಒಳಗೊಂಡಿರುತ್ತದೆ. ಕಾನೂನು ಮಾಪನಶಾಸ್ತ್ರ ನಿರೀಕ್ಷಕರು, ನಂಜನಗೂಡು ಕಛೇರಿಯ ವ್ಯಾಪ್ತಿಗೆ

ನಂಜನಗೂಡು, ಟಿ. ನರಸೀಪುರ ತಾಲ್ಲೂಕುಗಳು ಒಳಗೊಂಡಿವೆ. ನಿರೀಕ್ಷಕರು ನಂಜನಗೂಡು ಹಾಗೂ ಹುಣಸೂರು ಕಛೇರಿಗಳಲ್ಲಿ ಸತ್ಯಾಪನಾ ಶುಲ್ಕ ವಸೂಲಾತಿ, ಮೊಕದ್ದಮೆ ದಾಖಲಿಸಿರುವ ಬಗ್ಗೆ ತೂಕ, ಅಳತೆ, ಉಪಯೋಗದಾರರ ಸಂಖ್ಯೆ ತಪಾಸಣೆ, ಅಭಿಸಂಧಾನ ದಂಡ ವಸೂಲಿ ಮಾಡಿರುವ ಬಗ್ಗೆ ಅಂಕಿ ಅಂಶಗಳೊಂದಿಗೆ ಪರಿಶೀಲಿಸಲಾಗಿ, ನಿರೀಕ್ಷಕರು, ಹುಣಸೂರು ಇವರಿಗೆ ನೀಡಲಾಗಿರುವ ಕ್ಷೇತ್ರ ವ್ಯಾಪ್ತಿ, ಹೆಚ್ಚಿದ್ದು ನಿರೀಕ್ಷಕರು ನಂಜನಗೂಡು ಇವರಿಗೆ ಕಡಿಮೆಯಾಗಿರುತ್ತದೆ. ಈ ಅಸಮತೋಲನೆಯನ್ನು ಸರಿಪಡಿಸುವ ದೃಷ್ಟಿಯಿಂದ ನಿರೀಕ್ಷಕರು, ಹುಣಸೂರು ಕ್ಷೇತ್ರ ವ್ಯಾಪ್ತಿಯಲ್ಲಿರುವ ಹೆಚ್.ಡಿ. ಕೋಟೆ ತಾಲ್ಲೂಕನ್ನು ನಿರೀಕ್ಷಕರು, ನಂಜನಗೂಡು ಉಪವಿಭಾಗಕ್ಕೆ ಸೇರ್ಪಡಿಸಿದಲ್ಲಿ ಇಬ್ಬರು ನಿರೀಕ್ಷಕರ ಕಛೇರಿಗಳ ಕೆಲಸ ಕಾರ್ಯಗಳು ಸಮಾನಾಂತರವಾಗಿ ನಡೆದು ಸಾರ್ವಜನಿಕ ಹಿತದೃಷ್ಟಿಯಿಂದ ನಿರೀಕ್ಷಕರು, ನಂಜನಗೂಡು ಹಾಗೂ ನಿರೀಕ್ಷಕರು, ಹುಣಸೂರು ಕಛೇರಿಗಳ ಕ್ಷೇತ್ರವ್ಯಾಪ್ತಿಯನ್ನು ಮರುವಿಂಗಡಣೆ ಮಾಡುವುದು ಅನಿವಾರ್ಯವಾಗಿದೆ. ಆದ್ದರಿಂದ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಕಾನೂಇ/ಕ್ಷೇ.ವ್ಯಾ/ಸಿಆರ್-2/07-08, ದಿನಾಂಕ: 3ನೇ ಸೆಪ್ಟೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಕಾನೂನು ಮಾಪನಶಾಸ್ತ್ರ ನಿಯಂತ್ರಕ ಶ್ರೀ ಎನ್. ಪ್ರಕಾಶ್, ಆದ ನಾನು (ಪ್ರಮಾಣಬದ್ಧ ತೂಕ ಮತ್ತು ಅಳತೆ (ಅಮಲುಜಾರಿ) ಕಾಯ್ದೆ 1985ರ ಕಲಂ 5ರ ಉಪ ಕಲಂ 3 ರಲ್ಲಿ) ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಕ್ಷೇತ್ರವ್ಯಾಪ್ತಿಯನ್ನು ಕಾನೂನು ಮಾಪನಶಾಸ್ತ್ರ ನಿರೀಕ್ಷಕರು ನಂಜನಗೂಡು ಹಾಗೂ ಹುಣಸೂರು ಕಛೇರಿಗಳಿಗೆ ನೀಡಿರುತ್ತೇನೆ. ಈ ಆದೇಶವು ತತ್‌ಕ್ಷಣದಿಂದಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

| ಕ್ರ. ಸಂ. | ಕಛೇರಿಯ ಹೆಸರು | ನಿರ್ದಿಷ್ಟಪಡಿಸಿರುವ ಕ್ಷೇತ್ರವ್ಯಾಪ್ತಿ |
|---|---|---|
| (1) | ಕಾನೂನು ಮಾಪನಶಾಸ್ತ್ರ ನಿರೀಕ್ಷಕರು, ನಂಜನಗೂಡು ಉಪವಿಭಾಗ, ನಂಜನಗೂಡು. | (1) ನಂಜನಗೂಡು ತಾಲ್ಲೂಕು<br>(2) ಟಿ. ನರಸೀಪುರ ತಾಲ್ಲೂಕು<br>(3) ಹೆಚ್.ಡಿ. ಕೋಟೆ ತಾಲ್ಲೂಕು |
| (2) | ಕಾನೂನು ಮಾಪನಶಾಸ್ತ್ರ ನಿರೀಕ್ಷಕರು, ಹುಣಸೂರು ಉಪವಿಭಾಗ, ಹುಣಸೂರು | (1) ಹುಣಸೂರು ತಾಲ್ಲೂಕು<br>(2) ಪಿರಿಯಾಪಟ್ಟಣ ತಾಲ್ಲೂಕು<br>(3) ಕೆ.ಆರ್. ನಗರ ತಾಲ್ಲೂಕು |

**ಎನ್. ಪ್ರಕಾಶ್**

ಪಿ.ಆರ್. 1214 ಕಾನೂನು ಮಾಪನಶಾಸ್ತ್ರ ನಿಯಂತ್ರಕರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-1,**
**ಕಾರ್ಮಿಕ ಭವನ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**
**ಸಂಖ್ಯೆ:ಡಬ್ಲ್ಯುಸಿಎ/ಎಫ್‌ಸಿ/ಸಿಆರ್-28/2007, ದಿನಾಂಕ: 7ನೇ ಸೆಪ್ಟೆಂಬರ್ 2007**

**ಅರ್ಜಿದಾರರು:**

1 ಶ್ರೀಮತಿ ಫಾತೀಮಾ ಬೀ ಲೇಟ್ ಫೈಜ್ ಅಹಮದ್ ಅಲಿಯಾಸ್ ಭಾಷಾಖಾನ್ ರವರ ಪತ್ನಿ, ವಯಸ್ಸು 45 ವರ್ಷ

2 ಶ್ರೀಮತಿ ಶಬಾನಾ ಖಾನಂ, ಲೇಟ್ ಫೈಜ್ ಅಹಮದ್ ಅಲಿಯಾಸ್ ಭಾಷಾಖಾನ್ ರವರ ಮಗಳು

3 ಶ್ರೀಮತಿ ಸುಲ್ತಾನಾ, ಲೇಟ್ ಫೈಜ್ ಅಹಮದ್ ಅಲಿಯಾಸ್ ಭಾಷಾಖಾನ್ ರವರ ಮಗಳು

4 ಶ್ರೀಮತಿ ರುಕ್ಸಾನಾ, ಲೇಟ್ ಫೈಜ್ ಅಹಮದ್ ಅಲಿಯಾಸ್ ಭಾಷಾಖಾನ್ ರವರ ಮಗಳು

5 ಕು: ಸಲ್ಮಾ ಲೇಟ್ ಫೈಜ್ ಅಹಮದ್ ಅಲಿಯಾಸ್ ಭಾಷಾಖಾನ್ ರವರ ಮಗಳು

6 ಸಾದೀಕ್, ಲೇಟ್ ಫೈಜ್ ಅಹಮದ್ ಅಲಿಯಾಸ್ ಭಾಷಾಖಾನ್ ರವರ ಮಗ

7 ಜಬೀವುಲ್ಲಾ ಖಾನ್, ಲೇಟ್ ಫೈಜ್ ಅಲಿಯಾಸ್ ಭಾಷಾಖಾನ್ ಅಹಮದ್ ರವರ ಮಗ

8 ವಸೀಮ್ ಖಾನ್, ಲೇಟ್ ಫೈಜ್ ಅಲಿಯಾಸ್ ಭಾಷಾಖಾನ್ ಅಹಮದ್ ರವರ ಮಗ
ವಿಳಾಸ: ಜಯನಗರ, ಕಸಬಾ ಹೋಬಳಿ,
ನೆಲಮಂಗಲ (ತಾ) ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ದಿ ನ್ಯೂ ಇಂಡಿಯ ಅಶ್ಯೂರೆನ್ಸ್ ಕಂಪೆನಿ ಲಿ. ರೀಜನಲ್ ಆಫೀಸ್, ಮಿಷನ್ ರಸ್ತೆ, ಬೆಂಗಳೂರು.
2. ಶ್ರೀಮತಿ ಲಕ್ಷ್ಮೀ ದೇವಿ ಎಂ. ಅಗರವಾಲ್, ಶ್ರೀ ಮದನ್‌ಲಾಲ್ ಕೆ. ಅಗರವಾಲ್ ರವರ ಹೆಂಡತಿ, ನಂ.80/ಎ/4, ಕಿಮ್ಸನ್ ಬಿಲ್ಡಿಂಗ್, 2ನೇ ಮೇನ್, ಕಲಾಸಿಪಾಳ್ಯ, ಬೆಂಗಳೂರು-2

